# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 381 |
| ಸದಸ್ಯರ ಹೆಸರು | ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | 03.02.2021 |
| ಉತ್ತರಿಸುವ ಸಚಿವರು | ಕೃಷಿ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ನೀರು ಮತ್ತು ಗೊಬ್ಬರಗಳ ಬಳಕೆಯ ದಕ್ಷತೆಯನ್ನು ಹೆಚ್ಚಿಸಲು ಮತ್ತು ಕೃಷಿ ಉತ್ಪಾದನೆಯನ್ನು ಹೆಚ್ಚಿಸಲು ಸಾಮರ್ಥ್ಯ ಅಭಿವೃದ್ಧಿ ಮತ್ತು ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ಸರ್ಕಾರ ಹಾಕಿಕೊಂಡಿದೆಯೇ; | ಕೃಷಿ ಇಲಾಖೆಯಲ್ಲಿ ಕೇಂದ್ರ ಪುರಸ್ಕೃತ ಯೋಜನೆಯಾದ ರಾಷ್ಟ್ರೀಯ ಆಹಾರ ಭದ್ರತಾ ಅಭಿಯಾನದಡಿ ಬರುವ ಕಾರ್ಯಕ್ರಮಗಳಲ್ಲಿ ದ್ವಿದಳ ಧಾನ್ಯ, ಒರಟು ಧಾನ್ಯ, ನ್ಯೂಟ್ರಿ ಸಿರಿಧಾನ್ಯ, ಎಣ್ಣೆ ಕಾಳು, ವಾಣಿಜ್ಯ ಬೆಳೆಗಳಲ್ಲಿ ನೀರು ಮತ್ತು ಗೊಬ್ಬರಗಳ ಸದ್ಬಳಕೆ ಮಾಡಿ ಉತ್ತಮ ಬೆಳೆ ಪದ್ಧತಿಗಳನ್ನು ಅಳವಡಿಸಿ ಕೃಷಿ ಉತ್ಪಾದನೆಯನ್ನು ಹೆಚ್ಚಿಸುವ ನಿಟ್ಟಿನಲ್ಲಿ ಬೆಳೆ ಪ್ರಾತ್ಯಕ್ಷಿಕೆಗಳನ್ನು ಏರ್ಪಡಿಸಲಾಗುತ್ತಿದೆ. ಅಲ್ಲದೆ ರೈತರಿಗೆ ತರಬೇತಿಗಳನ್ನು ಬೆಳೆ ಪದ್ಧತಿ ತತ್ವದಡಿ ಆಯೋಜಿಸಲಾಗುತ್ತಿದೆ. ಬೆಳೆ ಕಟಾವಿನ ಹಂತದಲ್ಲಿ ಕ್ಷೇತ್ರೋತ್ಸವ ಹಮ್ಮಿಕೊಂಡು ಇತರೆ ರೈತರಿಗೆ ಈ ಪದ್ಧತಿಗಳ ಬಗ್ಗೆ ಅರಿವು ಮೂಡಿಸಲಾಗುತ್ತಿದೆ.<br>ಇದಲ್ಲದೆ, ರಾಜ್ಯದಲ್ಲಿ ಗೊಬ್ಬರಗಳ ಸದ್ಬಳಕೆಯಿಂದ ಕೃಷಿ ಉತ್ಪಾದಕತೆಯನ್ನು ಹೆಚ್ಚಿಸುವ ನಿಟ್ಟಿನಲ್ಲಿ ಸಾಮರ್ಥ್ಯ ಅಭಿವೃದ್ಧಿ ಮತ್ತು ಅರಿವು ಮೂಡಿಸಲು ಸರ್ಕಾರ ಮಣ್ಣು ಆರೋಗ್ಯ ಚೀಟಿ ಕಾರ್ಯಕ್ರಮದಲ್ಲಿ 4,573 ಗ್ರಾಮಗಳಲ್ಲಿ ಪ್ರಾತ್ಯಕ್ಷಿಕೆ ಮತ್ತು ರೈತರ ತರಬೇತಿಗಳನ್ನು ಹಮ್ಮಿಕೊಳ್ಳಲಾಗಿದೆ.<br>ಸುಜಲ-III ಯೋಜನೆಯಡಿ ರಾಜ್ಯದ 12 ಜಿಲ್ಲೆಗಳ 2,534 ಕಿರು ಜಲಾನಯನಗಳಲ್ಲಿ 14.00 ಲಕ್ಷ ಹೆ. ಮಳೆಯಾಶ್ರಿತ ಪ್ರದೇಶದಲ್ಲಿ ರಾಷ್ಟ್ರೀಯ ಮಣ್ಣು ಸಮೀಕ್ಷೆ ಮತ್ತು ಭೂ ಬಳಕೆ ನಿಯೋಜನೆ ಸಂಸ್ಥೆ (NBSS&LUP) ಭಾರತೀಯ ವಿಜ್ಞಾನ ಸಂಸ್ಥೆ (IISC) ಹಾಗೂ ರಾಜ್ಯ ಕೃಷಿ ಮತ್ತು ತೋಟಗಾರಿಕೆ ವಿಶ್ವವಿದ್ಯಾಲಯಗಳ ಸಹಯೋಗದೊಂದಿಗೆ ಸರ್ವೆ ನಂಬರ್‌ವಾರು ಭೂ-ಸಂಪನ್ಮೂಲ ಸಮೀಕ್ಷೆ (Land Resourse Inventory-LRI) ಕೈಗೊಂಡು ಮಣ್ಣಿನ ಗುಣಧರ್ಮಗಳ ಅಧ್ಯಯನ ಮಾಡಿ ವೈಜ್ಞಾನಿಕ ತಾಂತ್ರಿಕ ಮಾಹಿತಿಗಳನ್ನು ಸಂಗ್ರಹಿಸಲಾಗಿರುತ್ತದೆ.<br>ಈ ಮಾಹಿತಿಯನ್ನಾಧರಿಸಿ ಸ್ಥಳನಿರ್ಧಿಷ್ಟ ಶಿಫಾರಸ್ಸುಗಳನ್ನು ಒಳಗೊಂಡ ಭೂ-ಸಂಪನ್ಮೂಲ ಚೀಟಿಗಳನ್ನು (LRI Card) ತಯಾರಿಸಿ ರೈತರಿಗೆ ವಿತರಿಸಿ, ಮಣ್ಣಿನ ಫಲವತ್ತತೆ ಆಧಾರದ ಮೇಲೆ ಪೋಷಕಾಂಶಗಳ ಬಳಕೆ ಮಾಡುವ ಬಗ್ಗೆ ಮತ್ತು ಸಮರ್ಪಕವಾಗಿ ಮಣ್ಣು ಮತ್ತು ನೀರಿನ ಸಂರಕ್ಷಣೆ ಕ್ರಮಗಳನ್ನು ಅಳವಡಿಸಿಕೊಳ್ಳುವ ಬಗ್ಗೆ ರೈತರಿಗೆ ಅರಿವು ಮೂಡಿಸಲು ಗ್ರಾಮ ಮಟ್ಟದಲ್ಲಿ ತರಬೇತಿಗಳನ್ನು ಹಮ್ಮಿಕೊಳ್ಳಲಾಗಿರುತ್ತದೆ. |

| | | |
|---|---|---|
| ಆ) | ಈ ಉದ್ದೇಶಕ್ಕಾಗಿ ರಾಜ್ಯಾದ್ಯಂತ ಅಭಿವೃದ್ಧಿಪಡಿಸಲಾದ ಪ್ರಾತ್ಯಕ್ಷಿಕೆಗಳು ಎಷ್ಟು; | 2020-21 ನೇ ಸಾಲಿಗೆ ರಾಜ್ಯದಲ್ಲಿ ಒಟ್ಟು 1,06,320 ಹೆಕ್ಟೇರ್ ಗಳಲ್ಲಿ ಪ್ರಾತ್ಯಕ್ಷಿಕೆ ಗುರಿಯನ್ನು ಹೊಂದಿದ್ದು , ಪ್ರಸ್ತುತ 8,3073 ಸಾವಿರ ಹೆಕ್ಟೇರ್ ಪ್ರಗತಿ ಸಾಧಿಸಲಾಗಿರುತ್ತದೆ. ಮಣ್ಣು ಆರೋಗ್ಯ ಚೀಟಿ ಕಾರ್ಯಕ್ರಮದಡಿ 4,573 ಹೆಕ್ಟೇರ್ ಪ್ರದೇಶದಲ್ಲಿ ಪ್ರಾತ್ಯಕ್ಷಿಕೆಗಳನ್ನು ಅನುಷ್ಠಾನಗೊಳಿಸಲಾಗಿದೆ. |
| ಇ) | ಸದರಿ ಕಾರ್ಯಕ್ರಮವನ್ನು ಯಾವ ಯಾವ ಜಿಲ್ಲೆಗಳಲ್ಲಿ ಕೈಗೊಳ್ಳಲಾಗಿದೆ; (ವಿವರ ನೀಡುವುದು) | ಕೃಷಿ ಇಲಾಖೆಯಲ್ಲಿ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಪ್ರಾತ್ಯಕ್ಷಿಕೆಗಳನ್ನು ಕೈಗೊಳ್ಳಲಾಗಿದೆ.<br>ಸುಜಲ-III ಯೋಜನೆಯಲ್ಲಿ ಸದರಿ ಕಾರ್ಯಕ್ರಮವನ್ನು ರಾಜ್ಯದ ಚಾಮರಾಜನಗರ, ದಾವಣಗೆರೆ, ತುಮಕೂರು, ಚಿಕ್ಕಮಗಳೂರು, ರಾಯಚೂರು, ಕೊಪ್ಪಳ, ಕಲಬುರಗಿ, ಯಾದಗಿರಿ, ಗದಗ, ಬೀದರ್, ಬಳ್ಳಾರಿ ಮತ್ತು ವಿಜಯಪುರ ಜಿಲ್ಲೆಗಳಲ್ಲಿ ಕೈಗೊಳ್ಳಲಾಗಿದೆ. |
| ಈ) | ಈ ಕಾರ್ಯಕ್ರಮದ ಉಪಯೋಗ ಪಡೆದುಕೊಂಡ ರೈತರ ಸಂಖ್ಯೆ ಎಷ್ಟು? | ಕೃಷಿ ಇಲಾಖೆಯಲ್ಲಿ ರಾಷ್ಟ್ರೀಯ ಆಹಾರ ಭದ್ರತಾ ಅಭಿಯಾನದಡಿ ಹಾಗೂ ಮಣ್ಣು ಆರೋಗ್ಯ ಚೀಟಿ ಕಾರ್ಯಕ್ರಮದಡಿ ಪ್ರಾತ್ಯಕ್ಷಿಕೆ ಮತ್ತು ತರಬೇತಿ ಕಾರ್ಯಕ್ರಮಗಳಿಂದ ಪ್ರಸ್ತುತ 72,034 ಹಾಗೂ 1,13,389 ರೈತರು ಕ್ರಮವಾಗಿ ಉಪಯೋಗ ಪಡೆದುಕೊಂಡಿರುತ್ತಾರೆ.<br>ಸುಜಲ-III ಯೋಜನೆಯಲ್ಲಿ 98,583 ರೈತರಿಗೆ ಭೂ-ಸಂಪನ್ಮೂಲ ಮಾಹಿತಿ ಕುರಿತು ತರಬೇತಿ ನೀಡಿ 3.76ಲಕ್ಷ ಭೂ-ಸಂಪನ್ಮೂಲ ಕಾರ್ಡ್‌ಗಳನ್ನು ವಿತರಿಸಲಾಗಿದೆ. |

**ಸಂಖ್ಯೆ: AGRI-ACT/18/ 2021**

(ಬಿ.ಸಿ. ಪಾಟೀಲ್)
**ಕೃಷಿ ಸಚಿವರು**